## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 36 |
| ಸದಸ್ಯರ ಹೆಸರು | : | ಶ್ರೀ ಎನ್.ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 21.09.2020 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿರುವ ಸರ್ಕಾರಿ ಪದವಿ ಪೂರ್ವ ಕಾಲೇಜು ಮತ್ತು ಸರ್ಕಾರಿ ಪ್ರೌಢಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳ ಹಾಗೂ ಉಪನ್ಯಾಸಕರುಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ |
| ಆ) | ಇದರಿಂದಾಗಿ ಈ ವರ್ಷದ ಎಸ್.ಎಸ್.ಎಲ್.ಸಿ ಮತ್ತು ಪಿ.ಯು.ಸಿ ಪರೀಕ್ಷೆಯ ಫಲಿತಾಂಶದಲ್ಲಿ ಗಣನೀಯವಾಗಿ ಇಳಿಮುಖವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | **2018-19 ಮತ್ತು 2019-20ನೇ ಸಾಲಿನ ಎಸ್.ಎಸ್.ಎಲ್.ಸಿ ಫಲಿತಾಂಶದ ವಿವರ ಈ ಕೆಳಂಡಂತಿರುತ್ತದೆ.** (see table below) |

| ಕ್ರಮ ಸಂಖ್ಯೆ | ವರ್ಷ | ಪರೀಕ್ಷೆಗೆ ಹಾಜರಾದವರು | ಉತ್ತೀರ್ಣ ರಾದವರು | ಶೇಕಡಾವಾರು ಫಲಿತಾಂಶ |
|---|---|---|---|---|
| 1 | 2018-19 | 825468 | 608336 | 73.70 |
| 2 | 2019-20 | 811050 | 582316 | 71.80 |

2018-19 ಮತ್ತು 2019-20ನೇ ಸಾಲಿನ ಫಲಿತಾಂಶದಲ್ಲಿ ಅತ್ಯಲ್ಪ ವ್ಯತ್ಯಾಸ [1.9 %] ಕಂಡು ಬಂದಿರುತ್ತದೆ.

2019-20ನೇ ಸಾಲಿನ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ 18,072 ವಿದ್ಯಾರ್ಥಿಗಳು ಕೋವಿಡ್-19 ಹಿನ್ನೆಲೆಯಲ್ಲಿ ಮುಖ್ಯ ಪರೀಕ್ಷೆ ಬರೆಯಲು ಸಾಧ್ಯವಾಗಿರುವುದಿಲ್ಲ. ಸದರಿ ವಿದ್ಯಾರ್ಥಿಗಳಿಗೆ ಸೆಪ್ಟೆಂಬರ್-2020 ರಲ್ಲಿ ನಡೆಯುವ ಪೂರಕ ಪರೀಕ್ಷೆ ಬರೆಯಲು ಅವಕಾಶ ನೀಡಲಾಗಿದೆ. ಇದನ್ನು ಅವರ "**ಪ್ರಥಮ ಅವಕಾಶ**" ಎಂದು ಪರಿಗಣಿಸಲಾಗುತ್ತದೆ.

**ಪದವಿ ಪೂರ್ವ ಪರೀಕ್ಷೆಯ ಫಲಿತಾಂಶ:-** 2020ರ ದ್ವಿತೀಯ ಪಿಯುಸಿ ಪರೀಕ್ಷೆಗೆ ಒಟ್ಟು 6,75,277 ವಿದ್ಯಾರ್ಥಿಗಳು ಹಾಜರಾಗಿದ್ದು, ಶೇ:61.80 ಫಲಿತಾಂಶ ಬಂದಿರುತ್ತದೆ. ಕಳೆದ ವರ್ಷ ಹೋಲಿಸಿದಾಗ ಒಟ್ಟಾರೆ ಫಲಿತಾಂಶದಲ್ಲಿ 0.07ರಷ್ಟು ಹೆಚ್ಚಾಗಿರುತ್ತದೆ. ಕಳೆದ ವರ್ಷದ ಫಲಿತಾಂಶಕ್ಕೆ ಹೋಲಿಸಿದಾಗ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳ ಫಲಿತಾಂಶದಲ್ಲಿ ಅಲ್ಪಪ್ರಮಾಣದ ಇಳಿಕೆಯಾಗಿದ್ದು, ಆಂಗ್ಲ ಭಾಷಾ ವಿಷಯದ

ಪರೀಕ್ಷೆಯನ್ನು ನಡೆಸುವ ಸಂದರ್ಭದಲ್ಲಿ ಕೋವಿಡ್-19ರ ಸಾಂಕ್ರಾಮಿಕ ಮಹಾಮಾರಿಯು ರಾಜ್ಯದಾದ್ಯಂತ ಹರಡುತ್ತಿದ್ದ ಹಿನ್ನಲೆಯಲ್ಲಿ ಸದರಿ ಪರೀಕ್ಷೆಯನ್ನು ಮುಂದೂಡಿ 84 ದಿನಗಳ ನಂತರ ನಡೆಸಿದ ಹಿನ್ನಲೆಯು ಫಲಿತಾಂಶ ಇಳಿಕೆಗೆ ಕಾರಣವಾಗಿದ್ದು, ಮುಂದಿನ ಪರೀಕ್ಷೆಗಳಲ್ಲಿ ಗ್ರಾಮೀಣ ಭಾಗದ ವಿದ್ಯಾರ್ಥಿಗಳ ಫಲಿತಾಂಶವನ್ನು ಸುಧಾರಿಸುವ ನಿಟ್ಟಿನಲ್ಲಿ ಕ್ರಮವಹಿಸಲಾಗುತ್ತಿದೆ.

ಇ) ಹಾಗಿದ್ದಲ್ಲಿ, ಈ ಬಗ್ಗೆ ಕೈಗೊಂಡಿರುವ ಕ್ರಮಗಳೇನು? (ಮಂಡ್ಯ ಜಿಲ್ಲೆಯ ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

2020-21ನೇ ಸಾಲಿನಲ್ಲಿ ಪ್ರೌಢಶಾಲೆಗಳಲ್ಲಿ ಶಿಕ್ಷಕರ ಕೊರತೆಯನ್ನು ಸರಿದೂಗಿಸಲು ಮಂಡ್ಯ ಜಿಲ್ಲೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಅತಿಥಿ ಶಿಕ್ಷಕರ ನೇಮಕ ಮಾಡಿಕೊಳ್ಳಲು ಕ್ರಮವಹಿಸಲಾಗುತ್ತಿದೆ.

| ಕ್ರ ಸಂ | ತಾಲ್ಲೂಕು ಹೆಸರು | ಅತಿಥಿ ಶಿಕ್ಷಕರ ಸಂಖ್ಯೆ |
|---|---|---|
| 01 | ಕೆ.ಆರ್ ಪೇಟೆ | 25 |
| 02 | ಪಾಂಡವಪುರ | 14 |
| 03 | ನಾಗಮಂಗಲ | 18 |
| 04 | ಶ್ರೀರಂಗಪಟ್ಟಣ | 08 |
| 05 | ಮಳವಳ್ಳಿ | 23 |
| 06 | ಮದ್ದೂರು | 32 |
| 07 | ಮಂಡ್ಯ ಉತ್ತರ | 06 |
| 08 | ಮಂಡ್ಯ ದಕ್ಷಿಣ | 06 |
| | ಒಟ್ಟು | 132 |

**ಪದವಿ ಪೂರ್ವ ಶಿಕ್ಷಣ ಇಲಾಖೆ:-** ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿಯಿದ್ದ 1203 ವಿವಿಧ ವಿಷಯಗಳ ಉಪನ್ಯಾಸಕರ ಹುದ್ದೆಗೆ 2015ರಲ್ಲಿ ನೇಮಕಾತಿ ಅಧಿಸೂಚನೆ ಹೊರಡಿಸಿ, 2020ರ ಆಗಸ್ಟ್-ಸೆಪ್ಟೆಂಬರ್ ನಲ್ಲಿ ಆನ್‌ಲೈನ್ ಕೌನ್ಸಿಲಿಂಗ ನಡೆಸಿ ಸ್ಥಳ ನಿಯುಕ್ತಿಗೊಳಿಸಲಾಗಿದೆ.ಕೌನ್ಸಿಲಿಂಗ್ ನಂತರ 1040 ವಿವಿಧ ವಿಷಯಗಳ ಹುದ್ದೆಗಳು ಸಿ ವಲಯದ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿಯಿದ್ದು, ಸದರಿ ಹುದ್ದೆಗಳಿಗೆ ಕಾರ್ಯಭಾರ ಕಡಿಮೆಯಿರುವ ಸರ್ಕಾರಿ/ಅನುದಾನಿತ ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರುಗಳನ್ನು ನಿಯೋಜಿಸಿ ಕಾರ್ಯಭಾರವನ್ನು ಸರಿದೂಗಿಸಲಾಗುತ್ತಿದೆ.

**ಮೂಲಭೂತ ಸೌಲಭ್ಯಕ್ಕೆ ಸಂಬಂಧಿಸಿದಂತೆ:-**

- 2020-21 ನೇ ಸಾಲಿಗೆ 'ಶಾಲಾ ಸೌಲಭ್ಯಗಳ ನಿರ್ವಹಣೆ' ಕುಡಿಯುವ ನೀರು ಮತ್ತು ಶೌಚಾಲಯಗಳ ವಾರ್ಷಿಕ ನಿರ್ವಹಣೆಗೆ ಪ್ರತಿ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗೆ ರೂ.5400/- ರಂತೆ, ಪ್ರತಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ 6790/- ರಂತೆ, ಪ್ರತಿ ಸರ್ಕಾರಿ ಪ್ರೌಢಶಾಲೆಗೆ ರೂ.7400/- ರಂತೆ ಒಟ್ಟು ರೂ.3000 ಲಕ್ಷಗಳ ಅನುದಾನ ನಿಗದಿಯಾಗಿದ್ದು, ಮೊದಲನೇ ಮತ್ತು ಎರಡನೇ ತ್ರೈಮಾಸಿಕ ಅವಧಿಗೆ ರೂ.1500 ಲಕ್ಷಗಳ ಅನುದಾನವನ್ನು ಶಾಲಾ ಮುಖ್ಯೋಪಾಧ್ಯಾಯರು ಮತ್ತು ಎಸ್.ಡಿ.ಎಂ.ಸಿ ಬ್ಯಾಂಕ್

| | | |
|---|---|---|
| | | ಉಳಿತಾಯ ಖಾತೆಗಳಿಗೆ ಬಿಡುಗಡೆಗೊಳಿಸಿದೆ.<br>➢ 2020-21 ನೇ ಸಾಲಿಗೆ ನರೇಗಾ ಯೋಜನೆಯ ಒಗ್ಗೂಡಿಸುವಿಕೆ ಮೂಲಕ ಶಾಲಾ ಶೌಚಾಲಯ ನಿರ್ಮಾಣ, ಬಿಸಿಯೂಟದ ಅಡುಗೆ ಕೋಣೆ, ಮಳೆ ನೀರು ಕೊಯ್ಲು ರಚನೆ, ಶಾಲಾ ಕಾಂಪೌಂಡ್ ನಿರ್ಮಾಣ, ಪೌಷ್ಟಿಕ ತೋಟ ನಿರ್ಮಾಣಕ್ಕೆ ರೂ.2929.21 ಲಕ್ಷಗಳ ಅನುದಾನವನ್ನು ನಿಗದಿಪಡಿಸಿದ್ದು, ಮೊದಲನೇ ಮತ್ತು ಎರಡನೇ ತ್ರೈಮಾಸಿಕ ಅವಧಿಗೆ ರೂ.1205.50 ಲಕ್ಷಗಳ ಅನುದಾನವನ್ನು ರಾಜ್ಯದ ಎಲ್ಲಾ ಜಿಲ್ಲಾ ಉಪ ನಿರ್ದೇಶಕರು(ಆಡಳಿತ) ಇವರುಗಳಿಗೆ ಬಿಡುಗಡೆಗೊಳಿಸಿ, ಕಾಮಗಾರಿ ಕೈಗೊಳ್ಳಲು ಕ್ರಮವಹಿಸಿದೆ.<br>➢ 2019-20 ನೇ ಸಾಲಿಗೆ ರಾಜ್ಯವಲಯ ಮತ್ತು ವಿಶೇಷ ಅಭಿವೃದ್ಧಿ ಹಾಗೂ ಆರ್.ಐ.ಡಿ.ಎಫ್-25 ಯೋಜನೆಯಡಿ ಮಂಡ್ಯ ಜಿಲ್ಲೆಯ 13 ಸರ್ಕಾರಿ ಪ್ರೌಢಶಾಲೆಗಳ 15 ಕೊಠಡಿಗಳ ನಿರ್ಮಾಣಕ್ಕೆ ರೂ.236.10 ಲಕ್ಷಗಳು ಮತ್ತು 19 ಶಾಲೆಗಳ 74 ಕೊಠಡಿಗಳ ದುರಸ್ಥಿಗೆ ರೂ.58.38 ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸಿದೆ. ಕುಡಿಯುವ ನೀರು ಮತ್ತು ಶೌಚಾಲಯಗಳ ವಾರ್ಷಿಕ ನಿರ್ವಹಣೆಗಾಗಿ 214 ಸರ್ಕಾರಿ ಪ್ರೌಢಶಾಲೆಗಳಿಗೆ ಪ್ರತಿ ಶಾಲೆಗೆ ರೂ.6370 ರಂತೆ ಒಟ್ಟು ರೂ.13.63 ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸಿದೆ. (ತಾಲ್ಲೂಕುವಾರು ವಿವರ **ಅನುಬಂಧ-1**ರಲ್ಲಿ ಲಗತ್ತಿಸಿದೆ)<br>➢ ಶಾಲೆಗಳ ಕೊಠಡಿ ನಿರ್ಮಾಣ ಮತ್ತು ದುರಸ್ಥಿಗೆ ಅನುದಾನದ ಲಭ್ಯತೆಯ ಆಧಾರದ ಮೇಲೆ ಹಂತ ಹಂತವಾಗಿ ಕಾಮಗಾರಿ ಕೈಗೊಳ್ಳಲು ಕ್ರಮವಹಿಸಿದೆ.<br><br>**ಪದವಿ ಪೂರ್ವ ಶಿಕ್ಷಣ ಇಲಾಖೆ:-** 2018-19 ಹಾಗೂ 2019-20ರ ಸಾಲಿನಲ್ಲಿ ಮಂಡ್ಯ ಜಿಲ್ಲೆಗೆ ಒದಗಿಸಲಾದ ಮೂಲಭೂತ ಸೌಲಭ್ಯಗಳ ವಿವರಗಳನ್ನ **ಅನುಬಂಧ-2ರಲ್ಲಿ** ಲಗತ್ತಿಸಲಾಗಿದೆ. |

**ಇಪಿ 166 ಯೋಸಕ 2020**

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

## ಅನುಬಂಧ – 1

2019-20 ನೇ ಸಾಲಿನಲ್ಲಿ ರಾಜ್ಯವಲಯ ಮತ್ತು ವಿಶೇಷ ಅಭಿವೃದ್ಧಿ ಹಾಗೂ ಆರ್.ಐ.ಡಿ.ಎಫ್-25ಯೋಜನೆಯಡಿ ಮಂಡ್ಯ ಜಿಲ್ಲೆಯ ಸರ್ಕಾರಿ ಪ್ರೌಢಶಾಲೆಗಳ ಮೂಲಭೂತ ಸೌಲಭ್ಯಕ್ಕೆ ಬಿಡುಗಡೆಯಾದ ಅನುದಾನದ ವಿವರ.

| ಮೂಲಭೂತ ಸೌಲಭ್ಯ ಕಾಮಗಾರಿಗಳ ವಿವರ | | | | | | | | | | |
|---|---|---|---|---|---|---|---|---|---|---|
| ಕ್ರ.ಸಂ | ತಾಲ್ಲೂಕು | ಪ್ರೌಢಶಾಲಾ ಕೊಠಡಿಗಳ ನಿರ್ಮಾಣ | | | ಪ್ರೌಢಶಾಲಾ ಕೊಠಡಿಗಳ ದುರಸ್ಥಿ | | | ಕುಡಿಯುವ ನೀರು ಮತ್ತು ಶೌಚಾಲಯ ನಿರ್ವಹಣೆಗಾಗಿ ಪ್ರೌಢ ಶಾಲೆಗಳಿಗೆ ಬಿಡುಗಡೆಯಾದ ಅನುದಾನ [ ಘಟಕ ವೆಚ್ಚ ರೂ.6370] | |
| | | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಒಟ್ಟು ಅನುದಾನ (ರೂ.ಲಕ್ಷಗಳಲ್ಲಿ) | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಒಟ್ಟು ಅನುದಾನ (ರೂ.ಲಕ್ಷಗಳಲ್ಲಿ) | ಶಾಲೆಗಳ ಸಂಖ್ಯೆ | ಬಿಡುಗಡೆಯಾದ ಒಟ್ಟು ಅನುದಾನ (ರೂ.ಲಕ್ಷಗಳಲ್ಲಿ) |
| 1 | ಕೆ.ಆರ್ ಪೇಟೆ | 4 | 6 | 94.40 | 2 | 9 | 7.10 | 29 | 1.85 |
| 2 | ಪಾಂಡವಪುರ | 1 | 1 | 15.75 | 1 | 5 | 3.95 | 25 | 1.59 |
| 3 | ನಾಗಮಂಗಲ | 1 | 1 | 15.75 | 2 | 7 | 5.52 | 23 | 1.47 |
| 4 | ಶ್ರೀರಂಗಪಟ್ಟಣ | 2 | 2 | 31.45 | 3 | 13 | 10.26 | 19 | 1.21 |
| 5 | ಮಳವಳ್ಳಿ | 2 | 2 | 31.5 | 3 | 10 | 7.89 | 39 | 2.48 |
| 6 | ಮದ್ದೂರು | 2 | 2 | 31.5 | 2 | 7 | 5.52 | 36 | 2.29 |
| 7 | ಮಂಡ್ಯ | 1 | 1 | 15.75 | 6 | 23 | 18.14 | 43 | 2.74 |
| | ಒಟ್ಟು | 13 | 15 | 236.10 | 19 | 74 | 58.38 | 214 | 13.63 |

16.09.20

ಸಹ ನಿರ್ದೇಶಕರು (ಶಾಲಾ ಶಿಕ್ಷಣ)

ಅನುಬಂಧ - 2

ಅನುಬಂಧ

ಮಂಡ್ಯ ಜಿಲ್ಲೆಯಲ್ಲಿ ವಿವಿಧ ಯೋಜನೆಯಡಿ ಪದವಿ ಪೂರ್ವ ಶಿಕ್ಷಣ ಇಲಾಖಾವತಿಯಿಂದ ಅನುಷ್ಠಾನವಾಗುತ್ತಿರುವ ಕಾಮಗಾರಿಗಳ ವಿವರ

| ಕ್ರ.ಸಂ | ಯೋಜನೆ | ಕಾಲೇಜು ಸಂಕೇತ | ಸ.ಪ.ಪೂ.ಕಾ.ವಿಳಾಸ | ತಾಲ್ಲೂಕು | ಕಾಮಗಾರಿ | | | ಅನುಷ್ಠಾನ ಸಂಸ್ಥೆ | ಅನುಮೋದಿತ ಮೊತ್ತ (ರೂ ಲಕ್ಷಗಳಲ್ಲಿ) | ಕಾಮಗಾರಿ ಅನುಮೋದನೆಗೊಂಡ ವರ್ಷ |
|---|---|---|---|---|---|---|---|---|---|---|
| | | | | | ತರಗತಿ ಕೊಠಡಿ | ಶೌಚಾಲಯ | ಪ್ರಯೋಗಾಲಯ | | | |
| 1 | ರಾಜ್ಯಆಯವ್ಯಯ ವೆಚ್ಚ | PP010 | (ಬಾಲಕಿಯರ) ಕಲ್ಲು ಕಟ್ಟಡ | ಮಂಡ್ಯ | 6 | 2 | 0 | PRED | 100.00 | 2018-19 |
| 2 | ವಿಶೇಷ ಪ್ಯಾಕೇಜ್ | PP021 | ಕಿಕ್ಕೇರಿ | ಕೆ.ಆರ್.ಪೇಟೆ | 8 | 6 | 2 | PWD | 170.00 | |
| | | PP063 | ದುದ್ದ | ಮಂಡ್ಯ | 6 | 2 | 0 | | 100.00 | |
| | | PP114 | ಪೋಲೀಸ್ ಕಾಲೋನಿ | ಮಂಡ್ಯ | 6 | 2 | 0 | | 100.00 | |
| 3 | ಆರ್‌ಐಡಿಎಫ್-24 | PP050 | ಹೊನ್ನಲಗೆರೆ | ಮದ್ದೂರು | 6 | 2 | 0 | PWD | 96.00 | |
| | | PP059 | ಹರಿಹರಪುರ | ಕೆ.ಆರ್.ಪೇಟೆ | 2 | 2 | 0 | | 55.00 | |
| | | PP103 | ನಿಡಘಟ್ಟ | ಮದ್ದೂರು | 6 | 2 | 0 | | 96.00 | |
| | | PP115 | ಶಿವಪುರ | ಮದ್ದೂರು | 6 | 2 | 0 | | 96.00 | |
| | | PP116 | ಬೋಗಾದಿ | ನಾಗಮಂಗಲ | 2 | 2 | 0 | | 55.00 | |
| | | PP134 | ವಿಠ್ಠಲಪುರ | ಕೆ.ಆರ್.ಪೇಟೆ | 6 | 2 | 0 | | 96.00 | |
| | | PP139 | ಸರಗೂರು ಹ್ಯಾಂಡ್‌ಪೋಸ್ಟ್ | ಮಳವಳ್ಳಿ | 6 | 2 | 0 | | 96.00 | |
| 4 | ಎಸ್ ಡಿ ಪಿ | PP026 | ಬೆಳ್ಳೂರು | ನಾಗಮಂಗಲ | 6 | 2 | 0 | PRED | 100.00 | |
| 5 | ರಾಜ್ಯಆಯವ್ಯಯ ವೆಚ್ಚ | PP121 | ಅರಳಕುಪ್ಪೆ | ಪಾಂಡವಪುರ | 2 | 2 | 0 | PRED | 55.00 | 2019-20 |
| | | PP142 | ಸುಂಕಾತೊಣ್ಣೂರು | ಪಾಂಡವಪುರ | 2 | 2 | 0 | PRED | 55.00 | |
| 6 | ಎಸ್ ಡಿ ಪಿ | 2019-20 ನೇ ಸಾಲಿನಲ್ಲಿ 42 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ತಲಾ ರೂ 90000/- ದಂತೆ ಡೆಸ್ಕ್‌ಗಳನ್ನು ಹಾಗೂ 17 ವಿಜ್ಞಾನ ವಿಭಾಗ ಹೊಂದಿರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ತಲಾ ರೂ 40,000/-ಪ್ರಯೋಗಾಲಯ ಉಪಕರಣಗಳನ್ನು ಆಯಾ ಕಾಲೇಜುಗಳ ಪ್ರಾಂಶುಪಾಲರ ಹಂತದಲ್ಲಿ ಖರೀದಿಸಲು ರೂ 44.60 ಲಕ್ಷ ಅನುದಾನ ಬಿಡುಗಡೆ ಮಾಡಿದೆ. | | | | | | | 44.60 | |

ಜಂಟಿ ನಿರ್ದೇಶಕರು
ಪದವಿ ಪೂರ್ವ ಶಿಕ್ಷಣ ಇಲಾಖೆ